ವಸುದೇವ ಹಿಂದೆ ಕಶ್ಯಪನಾಗಿದ್ದ. ದೇವಕಿ ಅದಿತಿ. ಪ್ರತಿಕಲ್ಪದಲ್ಲಿಯೂ ಅವರೆ ಸ್ವಾಭಾವಿಕವಾಗಿ ದೇವತೆಗಳ ತಂದೆ ತಾಯಿಗಳು. ರಾಧೆಯ ಮಾತೆ ಕಲಾವತಿ ಪಿತೃಗಳ ಮಾನಸಪುತ್ರಿ. ವೃಷಭಾನು ಹಿಂದೆ ಗೋಲೋಕದಲ್ಲಿದ್ದ ವಸುದಾಮನೆಂಬ ಗೋಪಾಲಕ.

ಇದು ರಾಧೆಯ ಚರಿತ್ರೆ. ಸಂಪತ್ಕರ, ಪಾಪಪರಿಹಾರಕ, ಪುತ್ರ ಪೌತ್ರ ವೃದ್ಧಿಕರ.

ಶ್ರೀಕೃಷ್ಣನಿಗೆ ಎರಡು ರೂಪಗಳು. ವೈಕುಂಠದಲ್ಲಿರುವ ಚತುರ್ಭುಜ ರೂಪ ಒಂದು, ಗೋಲೋಕದಲ್ಲಿರುವ ದ್ವಿಭುಜ ರೂಪವಿನ್ನೊಂದು. ಮಹಾಲಕ್ಷ್ಮಿ, ಸರಸ್ವತಿ ಗಂಗೆ ತುಲಸಿಯರು ಚತುರ್ಭುಜನಾದ ನಾರಾಯಣನ ಪತ್ನಿಯರು. ದ್ವಿಭುಜ ಕೃಷ್ಣನ ಪತ್ನಿ ತೇಜಸ್ಸು ವಯಸ್ಸು ರೂಪ ಗುಣಗಳಲ್ಲಿ ಅವನಿಗೆ ಸಮಾನಳಾಗಿ ಅವನಿಂದಲೇ ಬಂದ ರಾಧೆ. ಅವಳ ನಾಮವನ್ನು ಉಚ್ಚರಿಸಿಯೆ ಕೃಷ್ಣನ ನಾಮ ಉಚ್ಚರಿಸಬೇಕು. ವ್ಯತ್ಯಾಸಮಾಡಿದರೆ ಬ್ರಹ್ಮಹತ್ಯಾದೋಷ ಬರುತ್ತದೆ.

ಕಾರ್ತಿಕ ಹುಣ್ಣಿಮೆಯಂದು ಗೋಲೋಕದ ರಾಸ ಮಂಡಲದಲ್ಲಿ ಕೃಷ್ಣ ರಾಧೆ-ಯನ್ನು ಪೂಜಿಸಿ ಉತ್ಸವವನ್ನಾಚರಿಸಿದ. ರಾಧೆಯ ಕವಚವನ್ನು ರತ್ನದ ತಾಯಿತ-ದಲ್ಲಿಟ್ಟು ಕಂಠದಲ್ಲಿಯೂ ಬಲಭುಜದಲ್ಲಿಯೂ ಧರಿಸಿದ. ಎಲ್ಲ ಗೋಪರಿಂದಲೂ ಧಾರಣೆ ಮಾಡಿಸಿದ. ಧ್ಯಾನ ಸ್ತೋತ್ರಗಳನ್ನೂ ಮಾಡಿ ರಾಧೆ ಅಗಿದುಕೊಟ್ಟ ತಾಂಬೂಲವನ್ನು ತಾನು ಮೆದ್ದ.

ಕೃಷ್ಣನಿಗೆ ರಾಧೆ ಪೂಜ್ಯಳು, ರಾಧೆಗೆ ಕೃಷ್ಣ ಪೂಜ್ಯ. ಒಬ್ಬರು ಇನ್ನೊಬ್ಬರಿಗೆ ಇಷ್ಟದೈವ. ಅವರಲ್ಲಿ ಭೇದವಣಿಸಿದರೆ ನರಕಪ್ರಾಪ್ತಿ. ಹೀಗೆ ಮೊದಲನೆ ಬಾರಿ ರಾಧೆಯನ್ನು ಕೃಷ್ಣ ಪೂಜಿಸಿದ.

ಎರಡನೆ ಬಾರಿ ಧರ್ಮ, ಬ್ರಹ್ಮ, ನಾನು, ಅನಂತ, ವಾಸುಕಿ, ಸೂರ್ಯ, ಚಂದ್ರ, ಇಂದ್ರ, ರುದ್ರರು, ಮನುಗಳು, ಮಾನವರು, ದೇವತೆಗಳು, ಋಷಿಗಳು ಹೀಗೆ ಎಲ್ಲರೂ ಪೂಜಿಸಿದರು. ಮೂರನೆಬಾರಿ ಸಪ್ತದ್ವೀಪ ಪತಿಯಾದ ಸುಯಜ್ಞ ಭಾರತದಲ್ಲಿ ಪುತ್ರ ಮಿತ್ರಾದಿಗಳೊಡನೆ ರಾಧೆಯನ್ನು ಪೂಜಿಸಿದ. ದೈವಯೋಗದಿಂದ ಆ ರಾಜ ಮೊದಲಿಗೆ ಬ್ರಾಹ್ಮಣ ಶಾಪಕ್ಕೊಳಗಾಗಿ ಕುಷ್ಠರೋಗ ಪೀಡಿತನಾಗಿ ದುಃಖಿತನಾಗಿದ್ದ. ಬಳಿಕ ರಾಧೆಯನ್ನು ಪೂಜಿಸಿ ಬ್ರಹ್ಮನು ಉಪದೇಶಿಸಿದ್ದ ಸ್ತೋತ್ರದಿಂದ ಸ್ತುತಿಸಿ ರಾಧಾ-ಕವಚವನ್ನು ಕಂಠದಲ್ಲಿಯೂ ಬಲ ತೋಳಿನಲ್ಲಿಯೂ ಧರಿಸಿ ಪುಷ್ಕರದಲ್ಲಿ ನೂರು ವರ್ಷ ತಪಸ್ಸು ಮಾಡಿ ಕೊನೆಯಲ್ಲಿ ರತ್ನಖಚಿತವಿಮಾನದಿಂದ ಗೋಲೋಕವನ್ನು ಸೇರಿದ.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ ನಾರದನಾರಾಯಣ ಸಂವಾದದೊಳಗಿನ ಹರ ಗೌರೀ ಸಂವಾದದಲ್ಲಿ ರಾಧೋಪಾಖ್ಯಾನದಲ್ಲಿ ರಾಧೆಗೆ ಸುದಾಮ ಶಾಪಾದಿಕಥನವೆಂಬ ನಲವತ್ತೊಂಬತ್ತನೆ ಅಧ್ಯಾಯ ಮುಗಿಯಿತು.**

# ರಾಧಾ ಆಖ್ಯಾನದಲ್ಲಿ ಸುಯಜ್ಞ ಉಪಾಖ್ಯಾನ

**ಅಧ್ಯಾಯ-೫೦**

ಪಾರ್ವತಿ— ನಾಥ, ಸುಯಜ್ಞ ಮಹಾರಾಜ ಯಾರು ? ಯಾವ ವಂಶದವನು ? ಅವನು ಬ್ರಾಹ್ಮಣ ಶಾಪಕ್ಕೊಳಗಾಗಲು ಕಾರಣವೇನು ? ರಾಧೆಯನ್ನು ಆತ ಹೇಗೆ ಪೂಜಿಸಿದ ? ಸರ್ವೇಶ್ವರನಾದ ಕೃಷ್ಣನ ಪತ್ನಿಯಾಗಿದ್ದು ಅವನಿಂದ ಪೂಜಿತಳಾದ ಆ ದೇವಿಯನ್ನು ಮಲಮೂತ್ರಧಾರಿಯಾದ ಒಬ್ಬ ಮಾನವ ಹೇಗೆ ಪೂಜಿಸಿದ ? ಅರವತ್ತು ಸಾವಿರ ವರ್ಷಕಾಲ ತಪಸ್ಸು ಮಾಡಿ ಬ್ರಹ್ಮ ರಾಧೆಯ ಪಾದಕಮಲ ಧೂಳಿಯನ್ನು ಪಡೆದ. ಆ ದೇವಿಯನ್ನು ನೀನೂ ಕೂಡ ಬಹು ಕಷ್ಟದಿಂದಲೆ ನೋಡಬಲ್ಲೆ. ಮಾನವರು ಹೇಗೆ ನೋಡಬಲ್ಲರು ? ಬ್ರಹ್ಮ ಆ ರಾಜನಿಗೆ ರಾಧಾಕವಚ ಧ್ಯಾನ ಪೂಜಾವಿಧಿ ಸ್ತೋತ್ರಗಳನ್ನು ಹೇಗೆ ಉಪದೇಶಿಸಿದ ?

ಶಿವ— ದೇವಿ, ಮನುಗಳಲ್ಲಿ ಮೊದಲನೆಯವನಾದ ಸ್ವಾಯಂಭುವ ಬ್ರಹ್ಮಪುತ್ರ, ತಪಸ್ವಿ, ಅವನ ಪತ್ನಿ ಶತರೂಪಾದೇವಿ. ಈ ದಂಪತಿಗಳ ಪುತ್ರ ಉತ್ತಾನಪಾದ. ಅವನ ಮಗ ಧ್ರುವ, ಮೂಲೋಕದಲ್ಲಿ ಪ್ರಖ್ಯಾತನಾದವ. ಅವನ ಮಗ ವಿಷ್ಣುಭಕ್ತನಾದ ಉತ್ಕಲ. ಆತ ಪುಷ್ಕರಕ್ಷೇತ್ರದಲ್ಲಿ ಒಂದು ಸಾವಿರ ರಾಜಸೂಯ ಯಾಗಮಾಡಿ ಸಾವಿರ ಅಮೂಲ್ಯ ರತ್ನರಾಶಿಗಳನ್ನೆ ಬ್ರಾಹ್ಮಣರಿಗೆ ದಾನಮಾಡಿದವ. ಆ ಯಜ್ಞಗಳ ವೈಭವವನ್ನು ನೋಡಿ ಬ್ರಹ್ಮ ರಾಜನಿಗೆ ಸುಯಜ್ಞ ಎಂಬ ಬಿರುದನ್ನಿತ್ತ.

ರಾಜಾ ಸುಯಜ್ಞ ಪ್ರತಿನಿತ್ಯ ಅನ್ನದಾನ, ರತ್ನದಾನ, ಸರ್ವಸಂಪದ್ದಾನ, ದಶಲಕ್ಷ ಗೋದಾನಗಳನ್ನು ವಿಪ್ರರಿಗೆ ನೀಡುತ್ತಿದ್ದ. ಆರು ಕೋಟಿ ಬ್ರಾಹ್ಮಣರಿಗೆ ಅನ್ನದಾನ ಮಾಡುತ್ತಿದ್ದ. ಚೋಷ್ಯ ಸುರಿದುಕೊಂಡು ಸೇವಿಸುವ ವಸ್ತು. ಚರ್ವ್ಯ ಅಗಿದು ತಿನ್ನುವ ವಸ್ತು. ಲೇಹ್ಯ ನೆಕ್ಕಿ ತಿನ್ನುವ ವಸ್ತು. ಪೇಯ ಕುಡಿಯುವ ವಸ್ತು. ಈ ನಾಲ್ಕು ವಿಧದ ಅನ್ನ ಮಾಂಸ ವರ್ಜಿತವಾಗಿದ್ದು ತೊವ್ವೆ ತುಪ್ಪ ಮೊಸರು ಮುಂತಾದವುಗಳಿಂದ ಕೂಡಿದ್ದು ಒಳ್ಳೆ ತೃಪ್ತಿ ಕೊಡುತ್ತಿತ್ತು. ಯಜ್ಞದ ಕೊನೆಯಲ್ಲಿ ಮೂವತ್ತಾರು ಲಕ್ಷಕೋಟಿ ವಿಪ್ರರಿಗೆ ಸಂಗ್ರಾಸ ಭೋಜನ. ಅವರಿಗೆ ಮನೆಗೆ ಒಯ್ಯಲಾಗದಷ್ಟು ರತ್ನಗಳ ದಾನ. ಆ ರತ್ನಗಳಲ್ಲಿ ಕೆಲವನ್ನು ಅವರು ಶೂದ್ರರಿಗೆ ಕೊಟ್ಟರು. ಕೆಲವನ್ನು ದಾರಿಯಲ್ಲಿಯೆ ಬಿಟ್ಟು ಹೋದರು. ಬ್ರಾಹ್ಮಣ ಭೋಜನವಾದ ಬಳಿಕ ಇತರ ಜಾತಿಯವರಿಗೂ ಭೋಜನ ನಡೆಯಿತು. ಆದರೂ ಸಾವಿರಾರು ಅನ್ನರಾಶಿಗಳು ಇನ್ನೂ ಉಳಿದಿದ್ದುವು. ಹೀಗೆ ಯಜ್ಞ ಮಾಡಿ ಮುಗಿಸಿ ರತ್ನಖಚಿತ ದಿವ್ಯ ಸಭಾಮಂಟಪದಲ್ಲಿ ವಸುಗಳು ಇಂದ್ರ ಚಂದ್ರ ರುದ್ರರು ಆದಿತ್ಯರು ನಾರದಾದಿ ಮುನಿಗಳು ಮನುಗಳು ಬ್ರಹ್ಮ ವಿಷ್ಣು ಶಿವರು ಇವರೆಲ್ಲರ ನಡುವೆ ರತ್ನಸಿಂಹಾಸನದಲ್ಲಿ ರಾಜ ಸುಯಜ್ಞ ಕುಳಿತ.

## ರಾಜ-ಮುನಿ ಸಂವಾದದಲ್ಲಿ ರಾಧೋಪಾಖ್ಯಾನದಲ್ಲಿ ಕರ್ಮವಿಪಾಕ ಕಥನ

## ಅಧ್ಯಾಯ-೫೧

ಪಾರ್ವತಿ— ಬ್ರಹ್ಮಪುತ್ರರಾದ ಮುನಿಗಳು ಆ ಬ್ರಾಹ್ಮಣನಿಗೆ ಏನು ಹೇಳಿದರು ?

ಶಿವ— ಮುನಿಗಳು ಆ ಬ್ರಾಹ್ಮಣನನ್ನು ವಿನಯದಿಂದ ಸ್ತುತಿಸಿ ಕ್ರಮವಾಗಿ ಹೇಳತೊಡಗಿದರು.

ಸನತ್ಕುಮಾರ- ಬ್ರಾಹ್ಮಣೋತ್ತಮ, ನೀನು ಹೊರಟರೆ ನಿನ್ನ ಬೆನ್ನ ಹಿಂದೆಯೆ ರಾಜನ ಸಂಪತ್ತು ಕೀರ್ತಿ ಬಲ ಯಶಸ್ಸು ಶೀಲ ಐಶ್ವರ್ಯ ಪಿತೃಗಳು ಅಗ್ನಿಗಳು ದೇವತೆಗಳು ಎಲ್ಲರೂ ಬರುತ್ತಿದ್ದಾರೆ. ರಾಜ ಸರ್ವಸ್ವವನ್ನೂ ಕಳೆದುಕೊಳ್ಳುತ್ತಿದ್ದಾನೆ. ಪ್ರಸನ್ನನಾಗು. ಕೋಪ ಬಿಡು. ಬ್ರಾಹ್ಮಣರ ಹೃದಯ ಬೆಣ್ಣೆಯಂತೆ ಮೃದು, ನಿರ್ಮಲ. ತಪಸ್ಸಿನಿಂದ ಅದರ ಕೊಳೆ ಎಲ್ಲವೂ ಹೋಗಿರುತ್ತದೆ. ಆದ್ದರಿಂದ ರಾಜನ ಅಪರಾಧ-ವನ್ನು ಕ್ಷಮಿಸು. ಬಾ, ಅರಮನೆಯನ್ನು ನಿನ್ನ ಪವಿತ್ರ ಪಾದಧೂಳಿಯಿಂದ ಶುದ್ಧಿ-ಗೊಳಿಸು. ರಾಜನನ್ನು ಆಶೀರ್ವದಿಸು.

ಭೃಗು- ಅತಿಥಿ ಯಾರ ಮನೆಗೆ ಬಂದು ನಿರಾಸೆಯಿಂದ ಹಿಂತಿರುಗುವನೋ ಅವನ ಮನೆಯಿಂದ ಪಿತೃಗಳೂ ದೇವತೆಗಳೂ ಅಗ್ನಿಗಳೂ ನಿರಾಶರಾಗಿ ಹೊರಟು-ಹೋಗುತ್ತಾರೆ. ಆದ್ದರಿಂದ ಬಾ, ಅರಮನೆಯನ್ನು ಪಾದದೂಳಿಯಿಂದ ಶುದ್ಧ-ಗೊಳಿಸು. ಅತಿಥಿ ಸತ್ಕಾರಕ್ಕೆ ಲೋಪ ಬಂದರೆ ಸ್ತ್ರೀಹತ್ಯೆ ಗೋಹತ್ಯೆ ಬ್ರಹ್ಮಹತ್ಯೆ ಕೃತಘ್ನತೆ ಗುರುತಲ್ಪಗಮನಗಳಷ್ಟು ದೋಷಬರುತ್ತದೆ.

ಪುಲಸ್ತ್ಯ— ಮನೆಗೆ ಬಂದ ಅತಿಥಿಯ ಕಡೆಗೆ ತಿರಸ್ಕಾರದ ವಕ್ರದೃಷ್ಟಿ ಬೀರಿದರೆ ಅತಿಥಿ ಅವನಿಗೆ ತನ್ನ ಪಾಪ ನೀಡಿ ಪುಣ್ಯವನ್ನು ಸೆಳೆದೊಯ್ಯುತ್ತಾನೆ. ರಾಜನ ಅಪರಾಧವನ್ನು ಮನ್ನಿಸು. ಪ್ರಾರಬ್ಧವಶದಿಂದ ಅವನು ಹಾಗೆ ಮಾಡಿದ್ದಾನೆ. ಕ್ಷಮಿಸಿ ಅರಮನೆಗೆ ಹಿಂತಿರುಗು.

ಪುಲಹ— ರಾಜ್ಯ ಸಂಪತ್ತಿನಿಂದ ಅಥವಾ ಪಾಂಡಿತ್ಯದಿಂದ ಗರ್ವಿತನಾಗಿ ಬ್ರಾಹ್ಮಣ-ನನ್ನು ಅವಮಾನಿಸುವ, ಸಂಧ್ಯಾವಂದನೆ ಏಕಾದಶೀವ್ರತ ವಿಷ್ಣುನೈವೇದ್ಯಭಕ್ಷಣಗಳಿಲ್ಲದ ಕ್ಷತ್ರಿಯ ಸಂಪತ್ತನ್ನು ಕಳೆದುಕೊಳ್ಳುತ್ತಾನೆ ಬಾ, ಅರಮನೆಯನ್ನು ಪಾದದೂಳಿಯಿಂದ ಪವಿತ್ರಗೊಳಿಸು, ರಾಜನನ್ನು ಕ್ಷಮಿಸು.

ಕ್ರತು— ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರು ಯಾರೇ ಆಗಲಿ ಬ್ರಾಹ್ಮಣಾವಮಾನ ಮಾಡಿದರೆ ಆತ ದೀಕ್ಷಾಹೀನನೆನಿಸುತ್ತಾನೆ. ಧನ ಪುತ್ರ ಭಾರ್ಯಾಹೀನನೂ ಆಗುತ್ತಾನೆ. ಆದ್ದರಿಂದ ಬಾ, ಅರಮನೆಯನ್ನು ಪವಿತ್ರಗೊಳಿಸು, ರಾಜನನ್ನು ಕ್ಷಮಿಸು.

ಒಬ್ಬ ಬ್ರಾಹ್ಮಣ ಆ ಸಭೆಯನ್ನು ಪ್ರವೇಶಿಸಿದ. ಆತನ ಶರೀರ ಸೊರಗಿತ್ತು. ಕಂಠ
ಓಷ್ಠ ತಾಲುಗಳು ಒಣಗಿದ್ದುವು. ಮಲಿನವಾದ ಬಟ್ಟೆ ಉಟ್ಟಿದ್ದ. ಚಂದನ ಪುಷ್ಪಮಾ-
ಲೆಗಳಿಂದ ಅಲಂಕೃತನಾಗಿ ರತ್ನಸಿಂಹಾಸನದಲ್ಲಿ ಕುಳಿತಿದ್ದ ರಾಜನನ್ನು ಆಶೀರ್ವದಿಸಿದ.
ರಾಜ ಕುಳಿತಲ್ಲಿಯೆ ಆ ಬ್ರಾಹ್ಮಣನಿಗೆ ನಮಸ್ಕರಿಸಿದ. ಎದ್ದು ಗೌರವ ತೋರಲಿಲ್ಲ.
ಸಭಾಸದರೂ ಯಾರೂ ಏಳಲಿಲ್ಲ. ಸ್ವಲ್ಪ ಹಾಸ್ಯವನ್ನೂ ಮಾಡಿದರು. ಬ್ರಾಹ್ಮಣ
ದೇವತೆಗಳಿಗೂ ಮುನಿಗಳಿಗೂ ನಮಸ್ಕರಿಸಿದ. ರಾಜನ ಕಡೆಗೆ ನೋಡಿ ಕೋಪದಿಂದ
ಶಪಿಸಿದ, 'ರಾಜನ್, ನೀನು ರಾಜಸಂಪತ್ತನ್ನು ಕಳೆದುಕೊಂಡು ಕುಷ್ಠರೋಗಿಯಾಗಿ
ಬುದ್ಧಿಹೀನನಾಗಿ ದುಃಖಿತನಾಗಿರು.' ಅಪಹಾಸ ಮಾಡಿದ ಸಭಾಸದರನ್ನೂ ಶಪಿಸಲು
ಉದ್ಯುಕ್ತನಾದ. ಆಗ ಅವರೆಲ್ಲ ಎದ್ದು ನಿಂತು ಪ್ರಣಾಮ ಮಾಡಿದರು. ಮುನಿಯ
ಕೋಪ ಶಾಂತವಾಯಿತು. ಆದರೂ ರಾಜ ಬಳಿಗೆ ಬಂದು ನಮಸ್ಕರಿಸಿ ತಡೆಯು-
ತ್ತಿದ್ದಂತೆಯೆ ಮುನಿ ಸಭೆಯಿಂದ ಹೊರಗೇ ನಡೆದ. ಮುನಿಗಳೂ ನಿಲ್ಲು ನಿಲ್ಲೆಂದು
ತಡೆದರು. ಆದರೂ ಆತ ನಿಲ್ಲಲಿಲ್ಲ. ಆಗ ಎಲ್ಲ ಮುನಿಗಳೂ ಅವನನ್ನು ಹಿಂಬಾಲಿಸಿ-
ದರು. ಪುಲಹ, ಪುಲಸ್ತ್ಯ, ಪ್ರಚೇತಸ್, ಭೃಗು, ಅಂಗಿರಸ್, ಮರೀಚಿ, ಕಶ್ಯಪ, ವಸಿಷ್ಠ
ಕ್ರತು, ಶುಕ್ರ, ಬೃಹಸ್ಪತಿ, ದೂರ್ವಾಸ, ಲೋಮಶ, ಗೌತಮ, ಕಣಾದ, ಕಣ್ವ
ಕಾತ್ಯಾಯನ, ಕಠ, ಪಾಣಿನಿ, ಜಾಜಲಿ, ಋಷ್ಯಶೃಂಗ, ವಿಭಾಂಡಕ, ತೈತ್ತಿರಿ, ಆಪಿಶಲಿ,
ಮಾರ್ಕಂಡೇಯ, ಸನಕ, ಸನಂದ, ವೋಢು, ಪೈಲ, ಸನಾತನ, ಸನತ್ಕುಮಾರ, ನರ,
ನಾರಾಯಣ, ಪರಾಶರ, ಜರತ್ಕಾರು, ಸಂವರ್ತ, ಕರಭ, ಭರದ್ವಾಜ, ವಾಲ್ಮೀಕಿ,
ಔರ್ವ, ಚ್ಯವನ, ಅಗಸ್ತ್ಯ, ಅತ್ರಿ, ಉತಥ್ಯ, ಸಂವರ್ತ, ಆಸ್ತೀಕ, ಆಸುರಿ, ಶಿಲಾಲಿ,
ಲಾಂಗಲಿ, ಶಾಕಲ್ಯ, ಶಾಕಟಾಯನ, ಗರ್ಗ, ವತ್ಸ, ಪಂಚಶಿಖ, ಜಮದಗ್ನಿ, ದೇವಲ,
ಜೈಗೀಷವ್ಯ, ವಾಮದೇವ, ವಾಲಖಿಲ್ಯಾದಿಗಳು, ಶಕ್ತಿ, ದಕ್ಷ ಕರ್ದಮ, ಪ್ರಸ್ಕನ್ನ, ಕಪಿಲ,
ವಿಶ್ವಾಮಿತ್ರ, ಕೌತ್ಸ, ಋಚೀಕ, ಅಘಮರ್ಷಣ ಇತ್ಯಾದಿ ಋಷಿಮುನಿಗಳೂ
ಪಿತೃದೇವತೆಗಳೂ ಅಗ್ನಿಗಳೂ ದಿಕ್ಪಾಲಕರೂ ಆ ಬ್ರಾಹ್ಮಣನನ್ನು ಹಿಂಬಾಲಿಸಿ
ಹೊರಟರು. ಅವನನ್ನು ಸಮಾಧಾನ ಪಡಿಸಿ ನಿಲ್ಲಿಸಿದರು. ಕ್ರಮವಾಗಿ ಎಲ್ಲರೂ
ಅವನಿಗೆ ಸಾಂತ್ವನ ಮಾಡುತ್ತ ಹೇಳಿದರು.

**ಇಲ್ಲಿಗೆ ಶ್ರೀ ಬ್ರಹ್ಮವೈವರ್ತ ಮಹಾಪುರಾಣದಲ್ಲಿ ಎರಡನೆಯದಾದ ಪ್ರಕೃತಿಖಂಡದ
ನಾರದನಾರಾಯಣ ಸಂವಾದಾಂತರ್ಗತ ಹರಗೌರೀ ಸಂವಾದದಲ್ಲಿ ರಾಧೋಪಾಖ್ಯಾನದಲ್ಲಿ
ಸುಯಜ್ಞೋಪಾಖ್ಯಾನವೆಂಬ ಐವತ್ತನೆ ಅಧ್ಯಾಯ ಮುಗಿಯಿತು.**